# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 499

ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 05-02-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಖಾಸಗಿ ಸಂಸ್ಥೆಗಳ ಬಸ್ಸುಗಳಿಗೆ ಸಂಚರಿಸಲು ಅನುಮತಿ ನೀಡುವಾಗ ಯಾವ ರೀತಿಯ ನಿರ್ಬಂಧಗಳನ್ನು ವಿಧಿಸಲಾಗಿದೆ; | ಮೋಟಾರು ವಾಹನಗಳ ಕಾಯ್ದೆ 1988ರ, ಕಲಂ 84 ಮತ್ತು 88(11)ರಲ್ಲಿ ನಿಗಧಿಪಡಿಸಿರುವ ನಿಬಂಧನೆಗಳನ್ನು ವಿಧಿಸಿ ರಾಜ್ಯದಲ್ಲಿ ಖಾಸಗಿ ಬಸ್ಸುಗಳಿಗೆ ಸಂಚರಿಸಲು ಅಖಿಲ ಭಾರತ ಪ್ರವಾಸಿ ರಹದಾರಿಯನ್ನು ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 64(1)(ix)ರಲ್ಲಿ ನಮೂದಿಸಿರುವ ನಮೂನೆ-49ರ ಪ್ರಕಾರ ನೀಡಲಾಗುತ್ತಿದೆ. |
| ಆ | ಖಾಸಗಿ ಬಸ್ಸುಗಳು, ಬಸ್ಸಿನ ಮೇಲೆ ದೊಡ್ಡ ಮಟ್ಟದಲ್ಲಿ ವಾಣಿಜ್ಯ ಸರಕುಗಳನ್ನು ಸಾಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದ ಪ್ರಯಾಣಿಕರ ಜೀವ ಹಾನಿಯಾದರೆ ಜವಾಬ್ದಾರಿ ಯಾರು; ಈ ಕುರಿತು ಸರ್ಕಾರದ ನಿಲುವೇನು; | ಖಾಸಗಿ ಬಸ್ಸುಗಳ ಮೇಲೆ ವಾಣಿಜ್ಯ ಸರಕುಗಳನ್ನು ಸಾಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಯಾವುದೇ ಪ್ರಯಾಣಿಕರ ಜೀವಹಾನಿಯಾದರೆ ಅದರ ಸಂಪೂರ್ಣ ಜವಾಬ್ದಾರಿ ಬಸ್ಸಿನ ಮಾಲೀಕರದ್ದಾಗಿರುತ್ತದೆ.<br>ಇದಕ್ಕೆ ಕಡಿವಾಣ ಹಾಕಲು ಇಲಾಖೆಯಿಂದ ನಿರಂತರವಾಗಿ ಪರ್ವತನ ಕಾರ್ಯ ಕೈಗೊಳ್ಳಲಾಗುತ್ತಿದೆ. |
| ಇ | ಖಾಸಗಿ ಬಸ್ಸುಗಳಲ್ಲಿ ಸರಕುಗಳನ್ನು ಸಾಗಿಸಲು ಅನುಮತಿ ನೀಡಲಾಗಿದೆಯೇ; ಇಲ್ಲವಾದ್ದಲ್ಲಿ ಕಳೆದ 2 ವರ್ಷಗಳಲ್ಲಿ ಈ ಕುರಿತು ಎಷ್ಟು ಪ್ರಕರಣಗಳು ದಾಖಲಾಗಿವೆ; ಎಷ್ಟು ದಂಡ ವಸೂಲಿ ಮಾಡಲಾಗಿದೆ; ಎಷ್ಟು ಖಾಸಗಿ ಬಸ್ಸುಗಳು ಲೈಸೆನ್ಸ್ ರದ್ದುಗೊಳಿಸಲಾಗಿದೆ? | ಖಾಸಗಿ ಬಸ್ಸುಗಳಲ್ಲಿ ಸರಕುಗಳನ್ನು ಸಾಗಿಸಲು ಅನುಮತಿ ನೀಡಲಾಗಿರುವುದಿಲ್ಲ. ಕಳೆದ ಎರಡು ವರ್ಷಗಳಲ್ಲಿ ಒಟ್ಟು 21,051 ವಾಹನಗಳನ್ನು ತಪಾಸಿಸಿ, 4,265 ಪ್ರಕರಣಗಳನ್ನು ದಾಖಲಿಸಿ, 08 ವಾಹನಗಳನ್ನು ವಶಪಡಿಸಿಕೊಂಡು, ಒಟ್ಟು ರೂ.209,22,599/- ಗಳನ್ನು ತೆರಿಗೆ ಮತ್ತು ದಂಡ ರೂಪದಲ್ಲಿ ವಸೂಲಿಸಲಾಗಿದೆ.<br>ಯಾವುದೇ ಖಾಸಗಿ ಬಸ್ಸುಗಳ ಲೈಸೆನ್ಸ್ ರದ್ದುಗೊಳಿಸಲಾಗಿರುವುದಿಲ್ಲ. ಆದಾಗ್ಯೂ (ಶಿಸ್ತು ಕ್ರಮ) ಕಳೆದ ಎರಡು ವರ್ಷಗಳಲ್ಲಿ ಒಟ್ಟು 184 ಖಾಸಗಿ ಬಸ್ಸುಗಳ ರಹದಾರಿ ಅಮಾನತ್ತುಗೊಳಿಸಲಾಗಿರುತ್ತದೆ |

ಟಿಡಿ 19 ಟಿಡಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.